

# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 170
ಸದಸ್ಯರ ಹೆಸರು : ಶ್ರೀ ಎಂ.ಎ. ಗೋಪಾಲಸ್ವಾಮಿ
ಉತ್ತರಿಸುವ ದಿನಾಂಕ : 14/12/2021
ಉತ್ತರಿಸುವ ಸಚಿವರು : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ಉದ್ದಿಮೆಗಳ ಸಚಿವರು

<table>
<tr><th>ಕ್ರ ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>(ಅ)</td><td>ಚನ್ನರಾಯಪಟ್ಟಣ ನಗರಸಭೆಯು ಪ್ರಸ್ತುತ ಎಷ್ಟು ವಾರ್ಡ್‌ಗಳನ್ನು ಒಳಗೊಂಡಿದೆ; ಇವುಗಳಿಗೆ ಮೂಲಭೂತ ಸೌಕರ್ಯ ಒದಗಿಸಲು ಕಳೆದ 3 ವರ್ಷಗಳಲ್ಲಿ ಎಷ್ಟು ಅನುದಾನವನ್ನು ವ್ಯಯಿಸಲಾಗಿದೆ; ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಲಾಗಿದೆ; (ಕಾಮಗಾರಿವಾರು, ವರ್ಷವಾರು ವಿವರ ನೀಡುವುದು)</td><td>ಚನ್ನರಾಯಪಟ್ಟಣ ಪುರಸಭೆ ಒಟ್ಟು 23 ವಾರ್ಡ್‌ಗಳನ್ನು ಒಳಗೊಂಡಿರುತ್ತದೆ.<br>ಚನ್ನರಾಯಪಟ್ಟಣ ನಗರ ಸ್ಥಳೀಯ ಸಂಸ್ಥೆಯ ವಾರ್ಡ್‌ಗಳಲ್ಲಿ ವಿವಿಧ ಮೂಲಭೂತ ಸೌಕರ್ಯ ಒದಗಿಸಲು 14ನೇ ಹಣಕಾಸು ಆಯೋಗದ ಅನುದಾನದಲ್ಲಿ ಮತ್ತು 15ನೇ ಹಣಕಾಸು ಆಯೋಗದ ಅನುದಾನದಲ್ಲಿ ವೆಚ್ಚ ಮಾಡಿರುವ ವಿವರಗಳು ಈ ಕೆಳಕಂಡಂತಿದೆ:<br>1) (ರೂ. ಲಕ್ಷಗಳಲ್ಲಿ)<br><table><tr><th>ಕ್ರ.ಸಂ</th><th>ಅನುದಾನ</th><th>ಸಾಲು</th><th>ಬಿಡುಗಡೆ</th><th>ವೆಚ್ಚ</th></tr><tr><td>1</td><td rowspan="2">14ನೇ ಹಣಕಾಸು ಆಯೋಗದ ಅನುದಾನ</td><td>2018–19</td><td>105.10</td><td>102.12</td></tr><tr><td>2</td><td>2019–20</td><td>141.00</td><td>140.99</td></tr><tr><td>3</td><td>15ನೇ ಹಣಕಾಸು ಆಯೋಗದ ಅನುದಾನ</td><td>2020–21</td><td>143.00</td><td>98.01</td></tr><tr><td colspan="3">ಒಟ್ಟು:</td><td>389.10</td><td>341.12</td></tr></table><br>ಕಳೆದ 3 ವರ್ಷಗಳಲ್ಲಿ 14ನೇ ಮತ್ತು 15ನೇ ಹಣಕಾಸು ಆಯೋಗದ ಅನುದಾನದಡಿ ಕೈಗೊಂಡ ಕಾಮಗಾರಿಗಳ ವಿವರವನ್ನು ಅನುಬಂಧ–01 ರಲ್ಲಿ ಲಗತ್ತಿಸಿದೆ.<br>2) ಚನ್ನರಾಯಪಟ್ಟಣ ಪುರಸಭೆ ವ್ಯಾಪ್ತಿಯಲ್ಲಿ ಮೂಲಭೂತ ಸೌಕರ್ಯ ಒದಗಿಸಲು ಕಳೆದ 3ವರ್ಷಗಳಲ್ಲಿ ನಗರೋತ್ಥಾನ (ಮುನಿಸಿಪಾಲಿಟಿ)–3ನೇ ಹಂತದ ಯೋಜನೆಯಡಿ ರೂ. 637.50 ಲಕ್ಷಗಳ ಕ್ರಿಯಾಯೋಜನೆ ಅನುಮೋದನೆಯಾಗಿದ್ದು, ರೂ. 478.26 ಲಕ್ಷಗಳು ವೆಚ್ಚ ಮಾಡಲಾಗಿರುತ್ತದೆ. ಸದರಿ ಯೋಜನೆಯಡಿ ಕೈಗೊಂಡಿರುವ ಕಾಮಗಾರಿಗಳ ವಿವರವನ್ನು ಅನುಭಂಧ–02 ರಲ್ಲಿ ಲಗತ್ತಿಸಿದೆ.</td></tr>
</table>

<table>
<tr>
<td></td>
<td></td>
<td>ಕೇಂದ್ರ ಪುರಸ್ಕೃತ ಸ್ವಚ್ಛ ಭಾರತ ಯೋಜನೆಯಡಿ ಕಳೆದ ಮೂರು ವರ್ಷಗಳಲ್ಲಿ ಚನ್ನರಾಯಪಟ್ಟಣ ಪುರಸಭೆಗೆ ಬಿಡುಗಡೆಯಾದ ಅನುದಾನ ಮತ್ತು ಕೈಗೆತ್ತಿಕೊಳ್ಳಲಾದ ಕಾಮಗಾರಿಗಳ ವಿವರ ಈ ಕೆಳಕಂಡಂತಿದೆ;<br>
<table>
<tr><th>ವರ್ಷ</th><th>ವ್ಯಯಿಸಲಾದ ಅನುದಾನ (ರೂ ಲಕ್ಷಗಳಲ್ಲಿ)</th><th>ಕೈಗೆತ್ತಿಕೊಳ್ಳಲಾದ ಕಾಮಗಾರಿಗಳ ವಿವರ</th></tr>
<tr><td>2018–19</td><td>1.33</td><td>19 ವೈಯಕ್ತಿಕ ಶೌಚಾಲಯಗಳನ್ನು ನಿರ್ಮಾಣ ಮಾಡಲಾಗಿರುತ್ತದೆ.</td></tr>
<tr><td>2019–20</td><td>–</td><td>–</td></tr>
<tr><td>2020–21</td><td>159.94</td><td>ಘನತ್ಯಾಜ್ಯ ವಸ್ತು ನಿರ್ವಹಣೆಗೆ ಸಂಬಂಧಿಸಿದಂತೆ ಒಟ್ಟು 12 ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದ್ದು 4 ಸಿವಿಲ್ ಮತ್ತ 8 ವಾಹನ ಯಂತ್ರೋಪಕರಣಗಳ ಖರೀದಿ ಕಾಮಗಾರಿಗಳು ಇದರ ಪೈಕಿ 8 ಕಾಮಗಾರಿಗಳು ಪೂರ್ಣಗೊಂಡಿದ್ದು ಉಳಿಕೆ 4 ಕಾಮಗಾರಿಗಳು ಪೂರ್ಣಗೊಳ್ಳುವ ಹಂತದಲ್ಲಿರುತ್ತವೆ.</td></tr>
<tr><td>ಒಟ್ಟು</td><td>161.27</td><td>–</td></tr>
</table>
3) ಚನ್ನರಾಯಪಟ್ಟಣ ಪುರಸಭೆಗೆ ಕಳೆದ 3 ವರ್ಷಗಳಲ್ಲಿ ಎಸ್.ಎಫ್.ಸಿ ಮುಕ್ತನಿಧಿ ಅನುದಾನ, ಎಸ್.ಎಫ್.ಸಿ ಕುಡಿಯುವ ನೀರಿನ ಮಂಜೂರಾದ ಅನುದಾನ ಹಾಗೂ ಬಿಡುಗಡೆಯಾದ ಅನುದಾನದ ವಿವರವನ್ನು ಅನುಬಂಧ–03 ರಂತೆ ಲಗತ್ತಿಸಿದೆ.<br>
ಎಸ್.ಎಫ್.ಸಿ ಮುಕ್ತನಿಧಿ ಅನುದಾನ, ಎಸ್.ಎಫ್.ಸಿ ಕುಡಿಯುವ ನೀರಿನ ಮಂಜೂರಾದ ಅನುದಾನದಡಿ ಕೈಗೊಳ್ಳಲಾದ ಕಾಮಗಾರಿಗಳ ವಿವರವನ್ನು ಅನುಬಂಧ–04 ರಂತೆ ಲಗತ್ತಿಸಿದೆ.</td>
</tr>
<tr>
<td>(ಆ)</td>
<td>ಚನ್ನರಾಯಪಟ್ಟಣ ತಾಲ್ಲೂಕು ಕೇಂದ್ರವು ಧಾರ್ಮಿಕ, ಶೈಕ್ಷಣಿಕ ಮತ್ತು ವಾಣಿಜ್ಯ ಕೇಂದ್ರವಾಗಿ ಬೆಳವಣಿಗೆ ಹೊಂದಿದ್ದು, ಇದರ ಅಕ್ಕ ಪಕ್ಕದಲ್ಲಿರುವ ಗ್ರಾಮಗಳನ್ನು ಸೇರಿಸಿಕೊಂಡು ಚನ್ನರಾಯಪಟ್ಟಣ ಪುರಸಭೆಯನ್ನು ನಗರಸಭೆಯನ್ನಾಗಿ ಘೋಷಣೆ ಮಾಡುವ ಆಲೋಚನೆ ಸರ್ಕಾರಕ್ಕಿದೆಯೇ;</td>
<td>ಇಲ್ಲ</td>
</tr>
</table>

| | | |
|---|---|---|
| (ಇ) | ಹಾಗಿದ್ದಲ್ಲಿ, ಯಾವ ಯಾವ ಗ್ರಾಮಗಳನ್ನು ನಗರಸಭೆ ವ್ಯಾಪ್ತಿಗೆ ಸೇರಿಸಲಾಗುವುದು; | ಉದ್ಭವಿಸುವುದಿಲ್ಲ. |
| (ಈ) | ಚನ್ನರಾಯಪಟ್ಟಣ ಪುರಸಭೆಯನ್ನು ನಗರಸಭೆಯನ್ನಾಗಿ ಘೋಷಣೆ ಮಾಡುವ ಬಗ್ಗೆ ಸರ್ಕಾರದ ನಿಲುವೇನು? (ಮಾಹಿತಿ ನೀಡುವುದು) | ಹಾಸನ ಜಿಲ್ಲೆ, ಚನ್ನರಾಯಪಟ್ಟಣ ಪುರಸಭೆಯನ್ನು ನಗರಸಭೆಯನ್ನಾಗಿ ಮೇಲ್ದರ್ಜೆಗೇರಿಸುವ ಕುರಿತು ಹಾಸನ ಜಿಲ್ಲಾಧಿಕಾರಿಯವರಿಂದ ಸೂಕ್ತ ಮತ್ತು ಅರ್ಹ ಪ್ರಸ್ತಾವನೆ ಸ್ವೀಕೃತವಾದಲ್ಲಿ ನಿಯಮಾನುಸಾರ ಕ್ರಮವಹಿಸಲಾಗುತ್ತದೆ. |

ಸಂಖ್ಯೆ: ನಅಇ 39 ಎಲ್‌ಸಿಕ್ಯೂ 2021

(ಎನ್. ನಾಗರಾಜು ಎಂ ಟಿ ಬಿ)
ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ಉದ್ದಿಮೆಗಳ ಸಚಿವರು)